# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ :: 883
ಸದಸ್ಯರ ಹೆಸರು :: ಶ್ರೀ ಡಾ.ತಳವಾರ್ ಸಾಬಣ್ಣ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ :: 10.03.2021
ಉತ್ತರಿಸುವ ಸಚಿವರು :: ಕಂದಾಯ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರ್ಗಿ ಜಿಲ್ಲೆ, ಶಹಾಬಾದ ತಾಲ್ಲೂಕಿನ ಭಂಕೂರು ಗ್ರಾಮ ಸುಮಾರು 20 ಸಾವಿರ ಜನಸಂಖ್ಯೆ ಹೊಂದಿದ್ದು ನೂರಾರು ವರ್ಷಗಳಿಂದ 0.33 ಗುಂಟೆ ಜಾಗದಲ್ಲಿ ಮೃತದೇಹಗಳ ಶವ ಸಂಸ್ಕಾರ ಮಾಡುತ್ತಿರುವುದ ನಿಜವೇ: | ಕಲಬುರಗಿ ಜಿಲ್ಲೆ, ಶಹಬಾದ ತಾಲ್ಲೂಕಿನ ಭಂಕೂರು ಗ್ರಾಮದಲ್ಲಿ 2011 ರ ಜನಗಣತಿ ಪ್ರಕಾರ 8653 ಜನಸಂಖ್ಯೆ ಹೊಂದಿರುತ್ತದೆ.<br>ಭಂಕೂರು ಗ್ರಾಮದ ಸ.ನಂ. 276 ರಲ್ಲಿ 0-33 ಗುಂಟೆ ಜಮೀನು ಸ್ಮಶಾನಕ್ಕಾಗಿ ಕಾಯ್ದಿರಿಸಲಾಗಿದೆ. ಸದರಿ ಜಮೀನು ಸ್ಮಶಾನಕ್ಕಾಗಿ ಉಪಯೋಗಿಸಲಾಗುತ್ತಿದೆ. |
| ಆ) | ಹೆಚ್ಚುತ್ತಿರುವ ಜನಸಂಖ್ಯೆ ಕಾರಣದಿಂದ ಶವ ಸಂಸ್ಕಾರಕ್ಕೆ ಭೂಮಿಯನ್ನು ಅಗೆದಾಗ ಈಗಾಗಲೇ ಶವ ಸಂಸ್ಕಾರ ಮಾಡಿದ ಶವಗಳ ಅವಶೇಷಗಳು ಸಿಗುತ್ತಿರುವುದು ನಿಜವೇ; | ಹೌದು. |
| ಇ) | ಗ್ರಾಮದ ಜನರು ಶವ ಸಂಸ್ಕಾರಕ್ಕೆ ಜಾಗ ಇಲ್ಲದ ಕಾರಣಕ್ಕೆ ಆಸ್ಪತ್ರೆ/ವೈದ್ಯಕೀಯ ಕಾಲೇಜುಗಳಿಗೆ ದೇಹ ದಾನ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಂತಹ ಯಾವುದೇ ಪ್ರಕರಣಗಳು ಗಮನಕ್ಕೆ ಬಂದಿರುವುದಿಲ್ಲ. |
| ಈ) | ಸರ್ವೆ ನಂ.115 ರಲ್ಲಿ 23.33 ಎಕರೆ ಭೂಮಿ ಖಾಲಿ ಇದ್ದು, ಇಲ್ಲಿ ಸವಳು ಮಣ್ಣು ಇರುವ ಕಾರಣ ಶವ ಸಂಸ್ಕಾರಕ್ಕೆ ಅಡ್ಡಿ ಆಗುತ್ತಿದ್ದು; ಭಂಕೂರು ಗ್ರಾಮಕ್ಕೆ ರುದ್ರ ಭೂಮಿ ಒದಗಿಸಲು ಸರ್ಕಾರ ಕ್ರಮ ಕೈಗೊಳ್ಳುವುದೆ? | ಕಲಬುರಗಿ ಜಿಲ್ಲೆ, ಶಹಬಾದ ತಾಲ್ಲೂಕಿನ ಭಂಕೂರು ಗ್ರಾಮದ ಸರ್ವೆ ನಂ.115 ರಲ್ಲಿ 23-33 ಎಕರೆ ಸರ್ಕಾರಿ ಭೂಮಿ ಇರುತ್ತದೆ. ಸ್ಮಶಾನಕ್ಕಾಗಿ ಪರಿಶೀಲನೆ ಮಾಡಲಾಗಿ ಸದರಿ ಭೂಮಿ ಮಣ್ಣು ಸವಳು ಮಣ್ಣು ಇರುವುದರಿಂದ ಶವಗಳು ಕೊಳೆಯುವುದಿಲ್ಲ ಎಂಬ ಕಾರಣಕ್ಕಾಗಿ ಸದರಿ ಜಮೀನು ಸ್ಮಶಾನಕ್ಕಾಗಿ ಮಂಜೂರು ಮಾಡಿರುವುದಿಲ್ಲ. ಜನಸಂಖ್ಯೆಗನುಗುಣವಾಗಿ ಸ್ಮಶಾನ ಭೂಮಿಯ ಅವಶ್ಯಕತೆಯನ್ನು ಮನಗಂಡು ನೇರ ಖರೀದಿಗಾಗಿ ಹಲವಾರು ಬಾರಿ ಗ್ರಾಮದ ರೈತರನ್ನು ಮನವೊಲಿಸಲಾಗಿರುತ್ತದೆ. ಅದರಂತೆ ಭಂಕೂರು ಗ್ರಾಮದ ಸ.ನಂ. 4ರಲ್ಲಿ ವಿಸ್ತೀರ್ಣ 4-33 (ಎಕರೆ/ಗುಂಟೆ) ಜಮೀನನ್ನು ಪಟ್ಟಾದಾರರು ಸ್ಮಶಾನಕ್ಕಾಗಿ ಭೂಮಿ ನೀಡುವುದಾಗಿ ಒಪ್ಪಿರುತ್ತಾರೆ. ನೇರ ಖರೀದಿಗಾಗಿ ಪ್ರಸ್ತಾವನೆ ಪ್ರಗತಿಯಲ್ಲಿರುತ್ತದೆ.<br>(ಸರ್ಕಾರದ ಸುತ್ತೋಲೆಗಳ ಪ್ರಕಾರ ಆ ಗ್ರಾಮದ ಜನಸಂಖ್ಯೆಗೆ ಅನುಗುಣವಾಗಿ ಪ್ರತಿ 1000 ಜನಸಂಖ್ಯೆಗೆ 00-20 ಗುಂಟೆಯಂತೆ ಗರಿಷ್ಟ 02-00 ಎಕರೆಯಂತೆ ಜಮೀನು ಕಾಯ್ದಿರಿಸಲಾಗುವುದು.) |

ಸಂಖ್ಯೆ:ಕಂಇ 17 ಎಲ್‌ಜಿಜಿ 2021

(ಆರ್.ಅಶೋಕ್)
ಕಂದಾಯ ಸಚಿವರು